# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 865

ಸದಸ್ಯರ ಹೆಸರು : ಡಾ: ತೇಜಸ್ವಿನಿ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು )

ಉತ್ತರಿಸುವ ದಿನಾಂಕ : 20-12-2021

ಉತ್ತರಿಸುವವರು : ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಅರಣ್ಯಗಳ ಅಂಚಿನಲ್ಲಿ ಆನೆ ತಡೆಗೆ ಅಳವಡಿಸಬೇಕಾಗಿರುವ ರೈಲು ಹಳಿಗಳ ಉದ್ದ ಹಾಗೂ ಪ್ರಮಾಣವೆಷ್ಟು; ಇದೀಗ ಅನುಷ್ಠಾನಗೊಳಿಸಿರುವ ಪ್ರದೇಶವೆಷ್ಟು; ಇದಕ್ಕೆ ತಗಲುವ ವೆಚ್ಚವೆಷ್ಟು; ಯಾವ ಅವಧಿಯ ಒಳಗೆ ಅಗತ್ಯ ಹಳಿ ಅಳವಡಿಕೆ ಕಾರ್ಯ ಮುಗಿಸಲು ಯೋಜನೆ ರೂಪಿಸಲಾಗಿದೆ; ಅನುದಾನ ಎಲ್ಲಿಂದ ತರಲಾಗುವುದು; | ರಾಜ್ಯದಲ್ಲಿ ಮಾನವ - ಆನೆ ಸಂಘರ್ಷ ನಿಯಂತ್ರಣಕ್ಕಾಗಿ ಉಪಯೋಗಿತ ರೈಲ್ವೆ ಹಳಿಗಳನ್ನು ಉಪಯೋಗಿಸಿ 624 ಕಿ.ಮೀ. ಉದ್ದದ ರೈಲ್ವೆ ಬ್ಯಾರಿಕೇಡ್ ನಿರ್ಮಾಣದ ಅವಶ್ಯವಿದ್ದು, 2019-20ನೇ ಸಾಲಿನ ವರಗೆ 165.38 ಕಿ.ಮೀ. ರೈಲ್ವೆ ಬ್ಯಾರಿಕೇಡ್ ನಿರ್ಮಿಸಲಾಗಿರುತ್ತದೆ. ಬಾಕಿ 458.62 ಕಿ.ಮೀ. ಬ್ಯಾರಿಕೇಡ್ ನ್ನು ಮೂರು ವರ್ಷಗಳ ಅವಧಿಯಲ್ಲಿ ನಿರ್ಮಿಸಲು ರೂ.550.34 ಕೋಟಿಗಳ ಅವಶ್ಯವಿದ್ದು, ಅನುದಾನಕ್ಕಾಗಿ ರಾಷ್ಟ್ರೀಯ ಪರಿಹಾರಾತ್ಮಕ ಅರಣ್ಯೀಕರಣ ನಿಧಿ ನಿರ್ವಹಣೆ ಮತ್ತು ಯೋಜನಾ ಪ್ರಾಧಿಕಾರ (National Compensatory Afforestation Fund Management & Planning Authority) ರವರಿಗೆ ದಿನಾಂಕ: 16-07-2020ರಲ್ಲಿ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಕಾಮಗಾರಿಯನ್ನು ಅವರು ಒಪ್ಪಿಕೊಂಡಿರುವುದಿಲ್ಲ.<br>ರಾಜ್ಯ ಸರ್ಕಾರವು 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿದಂತೆ ರೈಲ್ವೆ ಬ್ಯಾರಿಕೇಡ್ ನಿರ್ಮಾಣಕ್ಕಾಗಿ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದ್ದು, ಈ ಯೋಜನೆಯಡಿ ಬಿಡುಗಡೆಯಾದ ಅನುದಾನದಲ್ಲಿ ಈವರೆಗೆ ಒಟ್ಟು 181.802 ಕಿ.ಮೀ. ಬ್ಯಾರಿಕೇಡ್ ನಿರ್ಮಾಣ ಮಾಡಲಾಗಿರುತ್ತದೆ. (ಈ ಮೊದಲು ನಿರ್ಮಾಣ ಮಾಡಿದ 165.38 ಕಿ.ಮಿ ಒಳಗೊಂಡು) |
| ಆ) | ಅರಣ್ಯದ ದುರ್ಗಮ ಬೆಟ್ಟ ಪ್ರದೇಶದಲ್ಲಿ ಕಾಡ್ಗಿಚ್ಚು ಹೊತ್ತಿಕೊಂಡಾಗ ಶೀಘ್ರವಾಗಿ ನಂದಿಸಲು ಯಾವ ವ್ಯವಸ್ಥೆ ಇದೆ; ಇಲಾಖೆಯು ತನ್ನದೇ ಆದ ಮೀಸಲಿಟ್ಟ (Regular) ಸಣ್ಣ ವಿಮಾನಗಳು ಹೆಲಿಕಾಪ್ಟರ್ ವ್ಯವಸ್ಥೆ ಹೊಂದಿದೆಯೇ; ಇಲ್ಲವಾದಲ್ಲಿ, ವಿಮಾನ ಕಾರ್ಯಾಚರಣೆಗಾಗಿ ಹೆಲಿಕಾಪ್ಟರ್ ವಿಮಾನವನ್ನು ಖರೀದಿಸಲಾಗುವುದೆ; ಇದಕ್ಕೆ ಮೀಸಲಿಟ್ಟಿರುವ ಹಣವೆಷ್ಟು; | ಕಾಡಿನ ಬೆಂಕಿಯ ಘಟನೆಗಳನ್ನು ತಡೆಯಲು ವನ್ಯಜೀವಿ ಘಟಕದಿಂದ ಈ ಕೆಳಕಂಡ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ.<br>1. ಕರ್ನಾಟಕ ಅರಣ್ಯ ಇಲಾಖೆಯು ಬೆಂಕಿಯ ಸಂದರ್ಭದಲ್ಲಿ ಬೆಂಕಿಯ ಮುಂಗಡ ಮೇಲ್ವಿಚಾರಣೆಗಾಗಿ ಭಾರತೀಯ ಅರಣ್ಯ ಸಮೀಕ್ಷೆ ಮತ್ತು ರಾಷ್ಟ್ರೀಯ ದೂರ ಸಂವೇದಿ ಏಜೆನ್ಸಿ, ಹೈದರಾಬಾದ್‌ನ ಸಹಯೋಗದೊಂದಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ (KSRSAC), ಬೆಂಗಳೂರು ಇವರ ಸಹಯೋಗದೊಂದಿಗೆ "ಅರಣ್ಯ ಬೆಂಕಿ, ಉಸ್ತುವಾರಿ ಮತ್ತು ವಿಶ್ಲೇಷಣೆ ಕೋಶ" ಅನ್ನುಸ್ಥಾಪಿಸಲಾಗಿದ್ದು, ಸದರಿ ಕೋಶದ ವತಿಯಿಂದ ಕಾಡ್ಗಿಚ್ಚನ್ನು ಪತ್ತೆಹಚ್ಚಲು ಉಪಗ್ರಹ ಚಿತ್ರಗಳು ಮತ್ತು ಮಾಹಿತಿ ತಂತ್ರಜ್ಞಾನವನ್ನು ಬಳಸಲಾಗುತ್ತಿದೆ. ಸದರಿ ತಂತ್ರಜ್ಞಾನವು ಕಾಡಿನ ಬೆಂಕಿಯನ್ನು ಪರಿಣಾಮಕಾರಿಯಾಗಿ ಮತ್ತು ಸಮಯೋಚಿತವಾಗಿ ನಿಯಂತ್ರಿಸಲು ಸಹಾಯ ಮಾಡುತ್ತದೆ. |

| | | |
|---|---|---|
| | | 2. ತುರ್ತು ಪರಿಸ್ಥಿತಿಗಳಿಗೆ ಹಾಜರಾಗಲು ಆಯಕಟ್ಟಿನ ಸ್ಥಳಗಳಲ್ಲಿ ತಾತ್ಕಾಲಿಕ ಅಗ್ನಿಶಾಮಕ ಕೇಂದ್ರಗಳನ್ನು ಸ್ಥಾಪಿಸುವಲ್ಲಿ ಅರಣ್ಯ ಇಲಾಖೆಯು ಕರ್ನಾಟಕ ಅಗ್ನಿಶಾಮಕ ಮತ್ತು ತುರ್ತು ಸೇವಾ ಇಲಾಖೆಯೊಂದಿಗೆ ಸಹಕರಿಸುತ್ತಿದೆ.<br>3. ಬೆಂಕಿ ಅವಘಡಗಳು ಸಂಭವಿಸಿದ ಸ್ಥಳವನ್ನು ಪತ್ತೆಹಚ್ಚಲು ಸೂಕ್ಷ್ಮ ಪ್ರದೇಶಗಳಲ್ಲಿ ವಾಚ್ ಟವರ್‌ಗಳನ್ನು ನಿರ್ಮಿಸಲಾಗಿದೆ.<br>4. ವೈರ್‌ಲೆಸ್ ಸೆಂಟರ್ ಗಳಂತಹ ಪರಿಣಾಮಕಾರಿ ಸಂವಹನ ಸಾಧನಗಳ ಬಳಕೆ.<br>5. ದೊಡ್ಡ ಬೆಂಕಿಯ ಸಂದರ್ಭದಲ್ಲಿ, ಭಾರತೀಯ ವಾಯುಪಡೆಯ ಹೆಲಿಕಾಪ್ಟರ್ ಗಳ ಸೇವೆಯನ್ನು ಪಡೆದು ಬೆಂಕಿಯನ್ನು ನಂದಿಸಲು ಕ್ರಮ ತೆಗದುಕೊಳ್ಳಲಾಗುತ್ತದೆ.<br>ಅಗ್ನಿಶಾಮಕ ಇಲಾಖೆಯು ತುರ್ತು ಪರಿಸ್ಥಿತಿಗಳಿಗೆ ಹಾಜರಾಗಲು ಆಯಕಟ್ಟಿನ ಸ್ಥಳಗಳಲ್ಲಿ ತಾತ್ಕಾಲಿಕ ಅಗ್ನಿಶಾಮಕ ಕೇಂದ್ರಗಳನ್ನು ಸ್ಥಾಪಿಸಲು ಪ್ರತಿ ವರ್ಷ ಅಗ್ನಿಶಾಮಕ ಇಲಾಖೆಗೆ ರೂ.50.00 ಲಕ್ಷಗಳನ್ನು ಮೀಸಲಿಟ್ಟು ಪಾವತಿಸಲಾಗುತ್ತಿದೆ.<br>2019-20ನೇ ಸಾಲಿನಲ್ಲಿ "ಅರಣ್ಯ ಬೆಂಕಿ, ಉಸ್ತುವಾರಿ ಮತ್ತು ವಿಶ್ಲೇಷಣೆ ಕೋಶ" ಸ್ಥಾಪಿಸಲು ರೂ. 200.00 ಲಕ್ಷಗಳನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ (KSRSAC), ಬೆಂಗಳೂರು ರವರಿಗೆ ಪಾವತಿ ಮಾಡಲಾಗಿರುತ್ತದೆ. |
| ಇ) | ರಾಜ್ಯದ ಅರಣ್ಯಗಳಲ್ಲಿ ಬಲಾಢ್ಯ ಪ್ರಾಣಿಗಳಾದ ಆನೆ, ಹುಲಿ, ಸಿಂಹ, ಕರಡಿಗಳ ರಕ್ಷಣೆಗೆ ಅನೇಕ ಯೋಜನೆಗಳಿದ್ದು, ನಮ್ಮ ಕಾಡುಗಳಲ್ಲಿರುವ ವೈವಿಧ್ಯಮಯ ಸಣ್ಣ, ಅತಿ ಸಣ್ಣ ವನ್ಯಜೀವಿಗಳಾದ ನರಿ (jackal) ತೋಳ (Wolf) ಗುಳ್ಳೆನರಿ (Foxes) Great Indian Bustard ಮುಂತಾದವುಗಳ ಸಂರಕ್ಷಣೆ ಹಾಗೂ ವೃದ್ಧಿಗೆ ಯಾವ ಯಾವ ಕಾರ್ಯಕ್ರಮ ರೂಪಿಸಲಾಗಿದೆ; ಮೀಸಲಿಟ್ಟಿರುವ ಅನುದಾನವೆಷ್ಟು; | ರಾಜ್ಯದಲ್ಲಿರುವ ವನ್ಯಜೀವಿಗಳಿಗೆ ಸಂಪೂರ್ಣ ರಕ್ಷಣೆ ನೀಡುವ ಸಲುವಾಗಿ 5 ರಾಷ್ಟ್ರೀಯ ಉದ್ಯಾನವನ, 33 ಅಭಯಾರಣ್ಯಗಳ (5 ಹುಲಿ ಸಂರಕ್ಷಿತ ಪ್ರದೇಶಗಳು ಒಳಗೊಂಡಂತೆ), 14 ಸಂರಕ್ಷಣಾ ಮೀಸಲು ಪ್ರದೇಶ ಮತ್ತು 1 ಸಮುದಾಯ ಮೀಸಲು ಪ್ರದೇಶಗಳೆಂದು ಘೋಷಿಸಲಾಗಿದೆ.<br>ಮೇಲ್ಕಂಡ ಸಂರಕ್ಷಿತ ಪ್ರದೇಶಗಳು ನವಿಲು, ಕೃಷ್ಣಮೃಗ, ಕರಡಿ, ನೀರುನಾಯಿ, ಹಾರ್ನ್ ಬಿಲ್, ಬೀ-ಈಟರ್, ಕೋಲಾರ್ ಲೀಫ್ ನೋಸ್ಡ್ ಬ್ಯಾಟ್ ಇತ್ಯಾದಿ ವನ್ಯಜೀವಿಗಳ ಸಂರಕ್ಷಣೆಗಾಗಿ ಘೋಷಿಸಲಾದ ಸಂರಕ್ಷಣಾ ಮೀಸಲು ಪ್ರದೇಶಗಳನ್ನು ಒಳಗೊಂಡಿರುತ್ತದೆ.<br>ಮುಂದುವರೆದು, ಇಂಡಿಯನ್ ಗ್ರೇ ವುಲ್ಫ್ ಎಂದು ಕರೆಯಲ್ಪಡುವ ತೋಳಗಳ ಆವಾಸಸ್ಥಾನದ ಸಂರಕ್ಷಣೆಗಾಗಿ ಕೊಪ್ಪಳ ವಿಭಾಗದ ಗಂಗಾವತಿ ವಲಯದ ಬಂಕಾಪುರ ಬ್ಲಾಕ್-2 ಮೀಸಲು ಅರಣ್ಯ ಪ್ರದೇಶದ ಒಟ್ಟು 332.67 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಬಂಕಾಪುರ ತೋಳ ವನ್ಯಜೀವಿಧಾಮ ಎಂದು ಘೋಷಿಸಲು ದಿನಾಂಕ:19-01-2021ರಂದು ಸನ್ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ 15ನೇ ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ಅನುಮೋದನೆ ನೀಡಲಾಗಿದೆ. |

ಅಲ್ಲದೇ ರಾಜ್ಯದಲ್ಲಿ ಕಾಣಸಿಗುವ ವೈವಿಧ್ಯಮಯ ಸಣ್ಣ ಮತ್ತು ಅತೀ ಸಣ್ಣ ವನ್ಯಜೀವಿಗಳ ಹಾಗೂ ಅಳಿವಿನಂಚಿನಲ್ಲಿರುವ ಪ್ರಾಣಿ-ಪಕ್ಷಿಗಳ ಸಂರಕ್ಷಣೆಗಾಗಿ ಈ ಕೆಳಕಂಡ ಯೋಜನೆಗಳನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರದ ಅನುದಾನದಿಂದ ಅನುಷ್ಠಾನಗೊಳಿಸಲಾಗುತ್ತಿದೆ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ಯೋಜನೆ | 2020-21 | 2021-22 |
|---|---|---|---|
| 1 | ಗ್ರೇಟ್ ಇಂಡಿಯನ್ ಬಸ್ಟರ್ಡ್ ಸಂರಕ್ಷಣೆ | 137.67 | 46.00 |
| 2 | ರಣಹದ್ದುಗಳ ಸಂತತಿ ಸಂರಕ್ಷಣಾ ಕೇಂದ್ರ | 218.10 | 90.34 |
| 3 | ಅರೇಬಿಯನ್ ಸಮುದ್ರದ ಹಂಪ್ ಬ್ಯಾಕ್ ತಿಮಿಂಗಲಗಳ ಸಂರಕ್ಷಣೆ | 33.66 | 98.24 |
| 4 | ಪೂರ್ವ ಪ್ರಸ್ಥಭೂಮಿಯ ಬಯಲು ಸೀಮೆ ಜಿಲ್ಲೆಗಳ ವ್ಯಾಪ್ತಿಯಲ್ಲಿರುವ ಬೀದರ್, ಯಾದಗಿರಿ, ಕೊಪ್ಪಳ, ಕಲಬುರ್ಗಿ, ಚಿತ್ರದುರ್ಗಾ, ಬಾಗಲಕೋಟೆ, ದಾವಣಗೆರೆ, ಬಳ್ಳಾರಿ ಜಿಲ್ಲೆಗಳ ವ್ಯಾಪ್ತಿಯಲ್ಲಿರುವ ಅಳಿವಿನಂಚಿನಲ್ಲಿರುವ ಪ್ರಾಣಿ ಪಕ್ಷಿ ಸಂಕುಲಗಳ ಸಂರಕ್ಷಣೆ ಮತ್ತು ಅಭಿವೃದ್ಧಿ. | 200.00 | - |
| 5 | ರಾಜ್ಯದ ಪೂರ್ವ ಪ್ರಸ್ಥಭೂಮಿ ಪ್ರದೇಶದಲ್ಲಿ ಕಾಣಸಿಗುವ ಲೆಸ್ಸರ್ ಫ್ಲೋರಿಕಾನ್ (Lesser Florican) ಪಕ್ಷಿ ಪ್ರಭೇದ ಸಂರಕ್ಷಣೆ. | - | 50.00 |

| | | |
|---|---|---|
| ಈ) | ವನ್ಯಧಾಮಗಳಲ್ಲದ ಇತರೆ ಅರಣ್ಯ ಪ್ರದೇಶಗಳಲ್ಲಿ ಕಳ್ಳ-ಬೇಟೆ ತಡೆ ಶಿಬಿರ ವ್ಯವಸ್ಥೆ (Anti Poaching Camps) ಅನುಷ್ಠಾನದಲ್ಲಿದೆಯೇ; ಹಾಗಿದ್ದಲ್ಲಿ, ಅವುಗಳ ಸಂಖ್ಯೆ ಮತ್ತು ಕಾರ್ಯ ವಿಧಾನಗಳ ಬಗ್ಗೆ ವಿವರಿಸುವುದು; ಇಲ್ಲದಿದ್ದಲ್ಲಿ ಅವಶ್ಯವಿರುವ Anti Poaching Camps ಎಷ್ಟು; ಇವುಗಳ ನಿರ್ಮಾಣಕ್ಕಾಗಿ ಅಗತ್ಯವಿರುವ ವ್ಯವಸ್ಥೆ ಏನು; ಎಷ್ಟು ಅನುದಾನದಲ್ಲಿ ಇದನ್ನು ತ್ವರಿತವಾಗಿ ಸ್ಥಾಪಿಸಲಾಗುವುದು? | ವನ್ಯಜೀವಿ ಘಟಕದಿಂದ ವನ್ಯಧಾಮ ಮತ್ತು ಇತರೆ ಅರಣ್ಯ ಪ್ರದೇಶಗಳಲ್ಲಿ 542 ಕಳ್ಳ-ಬೇಟೆ ತಡೆ ಶಿಬಿರಗಳನ್ನು ಅತ್ಯಂತ ಸೂಕ್ಷ್ಮ ಅರಣ್ಯ ಪ್ರದೇಶದಲ್ಲಿ ಈಗಾಗಲೇ ಸ್ಥಾಪಿಸಿ ನಿರ್ವಹಿಸಲಾಗುತ್ತಿದೆ. ಪ್ರತಿ ಶಿಬಿರದಲ್ಲಿ 4 ಜನ ಸಿಬ್ಬಂದಿಗಳು ಕಾರ್ಯ ನಿರ್ವಹಿಸುತ್ತಿರುತ್ತಾರೆ.<br>ಕಳ್ಳಬೇಟೆ ತಡೆ ಶಿಬಿರಗಳು ಈ ಕೆಳಕಂಡ ದೈನಂದಿನ ಕಾರ್ಯಗಳನ್ನು ನಿರ್ವಹಿಸುತ್ತಿರುತ್ತವೆ.<br>• ರಕ್ಷಿತಾರಣ್ಯ ಹಾಗೂ ಅಭಯಾರಣ್ಯಗಳ ಸುತ್ತಲೂ ಗಸ್ತು ತಿರುಗುತ್ತಾ, ಅತೀ ಸೂಕ್ಷ್ಮ ಪ್ರದೇಶಗಳಲ್ಲಿ ಹಗಲು ರಾತ್ರಿ ಜಾಗೃತರಾಗಿ ಕಳ್ಳಬೇಟೆಗಾರರ ಬಗ್ಗೆ ನಿಗಾ ವಹಿಸಿರುತ್ತಾರೆ.<br>• ಅನಧಿಕೃತವಾಗಿ ಅರಣ್ಯ ಪ್ರದೇಶದ ಗಡಿ ರೇಖೆಯಲ್ಲಿ ಅಳವಡಿಸುವ ಉರುಳು ತೆಗೆಯುವುದು. |

| | | |
|---|---|---|
| | | • ಅಂತರಾಜ್ಯ ಗಡಿ ರೇಖೆಯಲ್ಲಿ ಸ್ಥಾಪಿಸಿರುವ ಶಿಬಿರಗಳಲ್ಲಿ ಹೊರರಾಜ್ಯಗಳಿಂದ ಅಕ್ರಮ ಬೇಟೆಗಾರರು ಪ್ರವೇಶಿಸದಂತೆ ನೋಡಿಕೊಳ್ಳುವುದು.<br>• ಹುಲ್ಲುಗಾವಲು ಪ್ರದೇಶ ಅಭಿವೃದ್ಧಿಪಡಿಸುವುದಕ್ಕಾಗಿ ಅವಶ್ಯಕತೆ ಇರುವ ಸ್ಥಳೀಯ ಜಾತಿಯ ಹುಲ್ಲುಬೀಜಗಳನ್ನು ಸಂಗ್ರಹಣೆ ಮಾಡುವುದು.<br>• ಕಳ್ಳಬೇಟೆ ತಡೆ ಶಿಬಿರದ ಸುತ್ತಮುತ್ತಲಿನ ಪ್ರದೇಶವನ್ನು ಸ್ವಚ್ಛವಾಗಿಟ್ಟುಕೊಂಡು ಹುಲ್ಲುಗಾವಲು ಪ್ರದೇಶವನ್ನಾಗಿ ಅಭಿವೃದ್ಧಿಪಡಿಸುವುದು.<br>• ಬೇಸಿಗೆಯ ಬೆಂಕಿ ಕಾಲದಲ್ಲಿ ಅರಣ್ಯ ಹಾಗೂ ವನ್ಯಪ್ರಾಣಿ ಸಂಪತ್ತನ್ನು ಬೇಸಿಗೆಯ ಬೆಂಕಿಯಿಂದ ರಕ್ಷಿಸುವುದಕ್ಕಾಗಿ ಕಾರ್ಯೋನ್ಮುಖರಾಗುವುದು.<br>• ಗಡಿ ರೇಖೆಯ ವ್ಯಾಪ್ತಿಯಲ್ಲಿ ಬರುವ ಶಿಬಿರದ ಸಿಬ್ಬಂದಿಗಳು ಆನೆತಡೆ ಕಂದಕ/ ಸೋಲಾರ್ ತಂತಿ ಬೇಲಿ/ ತಡೆಗೋಡೆಗಳು ಹಾಳಾಗದಂತೆ ಎಚ್ಚರಿಕೆ ವಹಿಸುವುದು .<br>ಅರಣ್ಯ ಪ್ರದೇಶಕ್ಕೆ ಅತಿಕ್ರಮವಾಗಿ ಯಾರೂ ಪ್ರವೇಶಿಸದಂತೆ ಎಚ್ಚರ ವಹಿಸುವುದು. ಗಡಿರೇಖೆಯಲ್ಲಿ ಅನುಮಾನಾಸ್ಪದವಾಗಿ ಸುತ್ತಾಡುವ ಜನರ ಬಗ್ಗೆ ನಿಗಾ ಇಡುವುದು. |

ಸಂಖ್ಯೆ: **ಅಪಜೀ 236 ಎಫ್‌ಡಬ್ಲ್ಯೂಎಲ್ 2021**

(ಉಮೇಶ್ ವಿ .ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು